5. ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್ಎಂ: 2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈ ಮತ್ತು ಇ) ಆದ ನಾನು 4ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

4ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ಒಟ್ಟು ರೂ. 42,223-00 (ನಲವತ್ತೆರಡು ಸಾವಿರದ ಇನ್ನೂರ ಇಪ್ಪತ್ತ ಮೂರು) ಗಳನ್ನು ದಿನಾಂಕ: 31.08.2004 ರಿಂದ ಸಾಲ ಪೂರ್ತಿ ಪಾವತಿಯಾಗುವವರೆಗೆ ಶೇಕಡಾ 17+2 ರಂತೆ ಬಡ್ಡಿ ಮತ್ತು ಸುಸ್ತಿ ಬಡ್ಡಿ ಹಾಗೂ ಇತರೆ ಖರ್ಚಿನೊಂದಿಗೆ ವಾದಿಯ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ: 17.01.2005ರ ಒಳಗಾಗಿ ಅಧಿಕೃತ ಚಲನ್/ ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ತೀರ್ಪು ಪೂರ್ವ ಜಪ್ತಿ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಪ್ರಕರಣದ 4ನೇ ಪ್ರತಿವಾದಿಯಾದ ಶ್ರೀ ಹೆಚ್. ಬಿ. ಹಾದಿಮನಿ ಬಿನ್ ಬಸಪ್ಪ ಹಾದಿಮನಿ ಇವರ ಹೆಸರಿನಲ್ಲಿರುವ ಬೆಂಗಳೂರು ಉತ್ತರ ತಾಲ್ಲೂಕು, ಯಲಹಂಕ ಹೋಬಳಿ, ಜಾರಕಬಂಡೆ ಕಾವಲು ಗ್ರಾಮದ ಸರ್ವೆನಂ. 1, ಪ್ಲಾಟ್ ನಂ. 44, ನಿವೇಶನ 1 ಮತ್ತು 2ನೇ ನಂಬರ್ ನಿವೇಶನವಾಗಿದ್ದು, ಹಾಲಿ ಬೆಂಗಳೂರು ಮಹಾನಗರ ಪಾಲಿಕೆ ಮಹಾಲಕ್ಷ್ಮಿಪುರ ವಲಯ, 12ನೇ ವಿಭಾಗಕ್ಕೆ ಸೇರಿರುವ, ಸರಸ್ವತಿಪುರ, 6ನೇ ಅಡ್ಡ ರಸ್ತೆಯಲ್ಲಿರುವ, ಮುನಿಸಿಪಲ್ 1-2/34ನೇ (ಒಂದು ಡ್ಯಾಷ್ ಎರಡು ಸಬ್ ಮೂವತ್ತ ನಾಲ್ಕು)ನೇ ನಂಬರು ಉತ್ತರಾರ್ಧ ಭಾಗದ ಮನೆ ಸಹಿತವಾದ ಸ್ವತ್ತಿಗೆ ಈ ಕೆಳಕಂಡ ಚಕ್ಕುಬಂದಿ:

| | | |
|---|---|---|
| ಪೂರ್ವಕ್ಕೆ | : | 24 ಮತ್ತು 23ನೇ ನಂಬರು ಸ್ವತ್ತುಗಳು |
| ಪಶ್ಚಿಮಕ್ಕೆ | : | ರಸ್ತೆ |
| ಉತ್ತರಕ್ಕೆ | : | 3ನೇ ನಂಬರು ಸ್ವತ್ತು |
| ದಕ್ಷಿಣಕ್ಕೆ | : | ಇದೇ ಮುನಿಸಿಪಲ್ 1-2/34ನೇ ನಂಬರು ಪೈಕಿ ದಕ್ಷಿಣಾರ್ಧ ಭಾಗದ 30-0 X 40-0 ಅಡಿಗಳ ಅಳತೆಯುಳ್ಳ ನಿವೇಶನ ಹಾಗೂ ಇದರಲ್ಲಿರುವ ಎರಡೂವರೆ ಚದರ ವಿಸ್ತೀರ್ಣದ ಮನೆ ಸಹಿತವಾದ ಸ್ವತ್ತು. ಈ ಮಧ್ಯೆ ಇರುವ ಪೂರ್ವ-ಪಶ್ಚಿಮ 40-0 (ನಲವತ್ತು) ಅಡಿಗಳು, ಉತ್ತರ-ದಕ್ಷಿಣ: 30-0 (ಮೂವತ್ತು) ಅಡಿಗಳು, ಒಟ್ಟು 1200 ಚದರ ಅಡಿಗಳು. ಈ ರೀತಿ ಅಳತೆ ಮತ್ತು ಚಕ್ಕುಬಂದಿಗೊಳಪಟ್ಟ ಮನೆ ಸಹಿತವಾದ ನಿವೇಶನ. |

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 6.12.2004 ರಂದು ನೀಡಿರುತ್ತೇನೆ.

ಪಿ.ಆರ್.7 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ).

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈ ಮತ್ತು ಇ) ರವರ ನ್ಯಾಯಾಲಯ**

**ಸಹಕಾರ ಸಂಘಗಳ ನಿಬಂಧಕರ ಕಛೇರಿ ನಂ. 1, ಆಲಿ ಆಸ್ಕರ್ ರಸ್ತೆ, ಬೆಂಗಳೂರು.**

**ಉಪಸ್ಥಿತರು :** ಶ್ರೀ ಬಿ. ನಾಗರಾಜ, ಎಂಎಸ್‌ಸಿ., ಎಲ್ಎಲ್‌ಬಿ,
ಸಹಕಾರ ಸಂಘಗಳ ಅಪರ ನಿಬಂಧಕರು (ಕೈ ಮತ್ತು ಇ)

**ದಾವಾ ಅರ್ಜಿ ಸಂಖ್ಯೆ ಅನಿ (ಕೈ ಮತ್ತು ಇ) ಡಿಐಎಸ್: ಡಿ7: 4262: 2004-2005**

**ವಾದಿ :**
ಕಾರ್ಯದರ್ಶಿ:
ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ.,
ನಂ. 11, ಬುಲ್ ಟೆಂಪಲ್ ರಸ್ತೆ, ಬಸವನಗುಡಿ,
ಬೆಂಗಳೂರು-560 004.

**ವಿರುದ್ಧ**

**ಪ್ರತಿವಾದಿಗಳು :**
1. ಶ್ರೀಮತಿ ಎಂ. ಜಯಶ್ರೀ ಕೋಂ ಮಂಜುನಾಥ್
ನಂ. 115, 3ನೇ ಅಡ್ಡರಸ್ತೆ, ಮಂಜುನಾಥನಗರ ಬೆಂಗಳೂರು-10.
2. ಶ್ರೀ ಮಾನಪ್ಪ ಎಸ್. ಹಾವೇರಿ ಬಿನ್ ಸಂಗಪ್ಪ ಹಾವೇರಿ
ನಂ. 14, 11ನೇ ಮುಖ್ಯರಸ್ತೆ, ಜೆ.ಸಿ. ನಗರ, ಕುರುಬರಹಳ್ಳಿ,
ಬೆಂಗಳೂರು-86
3. ಶ್ರೀ ಹೆಚ್. ಬಿ. ಹಾದಿಮನಿ
ಬಿನ್ ಬಸಪ್ಪ ಹಾದಿಮನಿ, ನಂ.15 2ನೇ ಮುಖ್ಯರಸ್ತೆ, 4ನೇ ಅಡ್ಡರಸ್ತೆ,
ಶಿವನಗರ, ರಾಜಾಜಿನಗರ, ಬೆಂಗಳೂರು-10

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು:**

1. ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ. 40,703-00 (ನಲವತ್ತು ಸಾವಿರದ ಏಳು ನೂರ ಮೂರು) ಗಳನ್ನು ದಿನಾಂಕ: 31.08.2004 ರಿಂದ ಸಾಲ ಪೂರ್ತಿಪಾವತಿಯಾಗುವವರೆಗೆ ಶೇಕಡ 17+2 ರಂತೆ ಬಡ್ಡಿ ಮತ್ತು ಸುಸ್ತಿ ಬಡ್ಡಿ ಹಾಗೂ ಇತರೆ ಖರ್ಚಿನೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ ಅನಿ (ಕೈ ಮತ್ತು ಇ) ಡಿಐಎಸ್:ಡಿ7:4262:2004-05 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

2. ಒಂದನೇ ಪ್ರತಿವಾದಿಯವರು ಪಡೆದಿರುವ ಈ ಸಾಲಕ್ಕೆ 2 ಮತ್ತು 3ನೇ ಪ್ರತಿವಾದಿಯವರು ಜಾಮೀನುದಾರರಾಗಿರುತ್ತಾರೆ.

3. ವಾದಿಯು ಈ ದಾವಾ ಅರ್ಜಿಯ ಜೊತೆ 1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 3ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 3ನೇ ಪ್ರತಿವಾದಿ ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಏಕ ಮಾತ್ರ ಸ್ವತ್ತನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ ಮಾಡಲು/ ಪರಬಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೆ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್: ಡಿಕ್ರಿ ನೀಡಿದರೂ ಸದರಿ ಅವಾರ್ಡ್: ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

4. ವಾದಿಯು ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೆ 3ನೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ ಹಾಗೂ ಪರಬಾರೆ ಮಾಡದಂತೆ: ತಡೆಯದೆ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

5. ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್ಎಂ: 2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈ ಮತ್ತು ಇ) ಆದ ನಾನು 3ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

3ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ, ರೂ. 40,703-00 (ನಲವತ್ತು ಸಾವಿರದ ಏಳು ನೂರ ಮೂರು) ಗಳನ್ನು ದಿನಾಂಕ: 31.08.2004 ರಿಂದ ಸಾಲ ಪೂರ್ತಿ ಪಾವತಿಯಾಗುವವರೆಗೆ ಶೇಕಡಾ 17+2 ರಂತೆ ಬಡ್ಡಿ ಮತ್ತು ಸುಸ್ತಿ ಬಡ್ಡಿ ಹಾಗೂ ಇತರೆ ಖರ್ಚಿನೊಂದಿಗೆ ವಾದಿಯ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ: 17.01.2005ರ ಒಳಗಾಗಿ ಅಧಿಕೃತ ಚಲನ್/ ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ತೀರ್ಪು ಪೂರ್ವ ಜಪ್ತಿ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಪ್ರಕರಣದ 3ನೇ ಪ್ರತಿವಾದಿಯಾದ ಶ್ರೀ ಹೆಚ್. ಬಿ. ಹಾದಿಮನಿ ಬಿನ್ ಬಸಪ್ಪ ಹಾದಿಮನಿ ಇವರ ಹೆಸರಿನಲ್ಲಿರುವ ಬೆಂಗಳೂರು ಉತ್ತರ ತಾಲ್ಲೂಕು, ಯಲಹಂಕ ಹೋಬಳಿ, ಜಾರಕಬಂಡೆ ಕಾವಲು ಗ್ರಾಮದ ಸರ್ವೆನಂ. 1, ಪ್ಲಾಟ್ ನಂ. 44, ನಿವೇಶನ 1 ಮತ್ತು 2ನೇ ನಂಬರ್ ನಿವೇಶನವಾಗಿದ್ದು, ಹಾಲಿ ಬೆಂಗಳೂರು ಮಹಾನಗರ ಪಾಲಿಕೆ ಮಹಾಲಕ್ಷ್ಮಿಪುರ ವಲಯ, 12ನೇ ವಿಭಾಗಕ್ಕೆ ಸೇರಿರುವ, ಸರಸ್ವತಿಪುರ, 6ನೇ ಅಡ್ಡ ರಸ್ತೆಯಲ್ಲಿರುವ, ಮುನಿಸಿಪಲ್ 1-2/34ನೇ (ಒಂದು ಡ್ಯಾಷ್ ಎರಡು ಸಬ್ ಮೂವತ್ತ ನಾಲ್ಕು)ನೇ ನಂಬರು ಉತ್ತರಾರ್ಧ ಭಾಗದ ಮನೆ ಸಹಿತವಾದ ಸ್ವತ್ತಿಗೆ ಈ ಕೆಳಕಂಡ ಚಕ್ಕುಬಂದಿ:

| | | |
|---|---|---|
| ಪೂರ್ವಕ್ಕೆ | : | 24 ಮತ್ತು 23ನೇ ನಂಬರು ಸ್ವತ್ತುಗಳು |
| ಪಶ್ಚಿಮಕ್ಕೆ | : | ರಸ್ತೆ |
| ಉತ್ತರಕ್ಕೆ | : | 3ನೇ ನಂಬರು ಸ್ವತ್ತು |
| ದಕ್ಷಿಣಕ್ಕೆ | : | ಇದೇ ಮುನಿಸಿಪಲ್ 1-2/34ನೇ ನಂಬರು ಪೈಕಿ ದಕ್ಷಿಣಾರ್ಧ ಭಾಗದ 30-0 x 40-0 ಅಡಿಗಳ ಅಳತೆಯುಳ್ಳ ನಿವೇಶನ ಹಾಗೂ ಇದರಲ್ಲಿರುವ ಎರಡೂವರೆ ಚದರ ವಿಸ್ತೀರ್ಣದ ಮನೆ ಸಹಿತವಾದ ಸ್ವತ್ತು. ಈ ಮಧ್ಯೆ ಇರುವ ಪೂರ್ವ-ಪಶ್ಚಿಮ 40-0 (ನಲವತ್ತು) ಅಡಿಗಳು, ಉತ್ತರ-ದಕ್ಷಿಣ: 30-0 (ಮೂವತ್ತು) ಅಡಿಗಳು, ಒಟ್ಟು 1200 ಚದರ ಅಡಿಗಳು. ಈ ರೀತಿ ಅಳತೆ ಮತ್ತು ಚಕ್ಕುಬಂದಿಗೊಳಪಟ್ಟ ಮನೆ ಸಹಿತವಾದ ನಿವೇಶನ. |

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 6.12.2004 ರಂದು ನೀಡಿರುತ್ತೇನೆ.

ಪಿ.ಆರ್.8

ಸಹಕಾರ ಸಂಘಗಳ ಅಪರ ನಿಬಂಧಕರು,
(ಕೈಗಾರಿಕೆ ಮತ್ತು ಇತರೆ).

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈ ಮತ್ತು ಇ) ರವರ ನ್ಯಾಯಾಲಯ**

**ಸಹಕಾರ ಸಂಘಗಳ ನಿಬಂಧಕರ ಕಛೇರಿ ನಂ. 1, ಆಲಿ ಆಸ್ಕರ್ ರಸ್ತೆ, ಬೆಂಗಳೂರು.**

**ಉಪಸ್ಥಿತರು :** ಶ್ರೀ ಬಿ. ನಾಗರಾಜ, ಎಂಎಸ್‌ಸಿ., ಎಲ್ಎಲ್‌ಬಿ,
ಸಹಕಾರ ಸಂಘಗಳ ಅಪರ ನಿಬಂಧಕರು (ಕೈ ಮತ್ತು ಇ)

**ದಾವಾ ಅರ್ಜಿ ಸಂಖ್ಯೆ ಅನಿ (ಕೈ ಮತ್ತು ಇ) ಡಿಐಎಸ್: ಡಿ7: 4263: 2004-2005**

**ವಾದಿ :**

ಕಾರ್ಯದರ್ಶಿ:
ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ.,
ನಂ. 11, ಬುಲ್ ಟೆಂಪಲ್ ರಸ್ತೆ, ಬಸವನಗುಡಿ,
ಬೆಂಗಳೂರು-560 004.

**ವಿರುದ್ಧ**

**ಪ್ರತಿವಾದಿಗಳು :**

1. ಶ್ರೀಮತಿ ನೀಲಾ ಹಾದಿಮನಿ
ಕೋಂ ಹೆಚ್. ಬಿ. ಹಾದಿಮನಿ, ನಂ. 15 2ನೇ ಮುಖ್ಯ ರಸ್ತೆ, 4ನೇ ಅಡ್ಡ ರಸ್ತೆ, ಶಿವನಗರ, ರಾಜಾಜಿನಗರ, ಬೆಂಗಳೂರು-10
2. ಶ್ರೀ ಎನ್. ಹೆಚ್. ಮಹಂತೇಶ್
ಬಿನ್ ನೀಲಪ್ಪ, ನಂ. 69, 4ನೇ ಅಡ್ಡರಸ್ತೆ, 5ನೇ ಮುಖ್ಯ ರಸ್ತೆ, ರಾಜಾಜಿನಗರ, ಬೆಂಗಳೂರು-10
3. ಶ್ರೀ ಬಿ. ಎಂ. ಮಾನಪ್ಪ ಬಿನ್ ಬಸಪ್ಪ
ನಂ. 53, 3ನೇ ಅಡ್ಡರಸ್ತೆ, ದೀಪಾಂಜಲಿನಗರ ಬೆಂಗಳೂರು-26
4. ಶ್ರೀ ಹೆಚ್. ಬಿ. ಹಾದಿಮನಿ
ಬಿನ್ ಬಸಪ್ಪ ಹಾದಿಮನಿ, ನಂ. 15 2ನೇ ಮುಖ್ಯ ರಸ್ತೆ, 4ನೇ ಅಡ್ಡರಸ್ತೆ, ಶಿವನಗರ, ರಾಜಾಜಿನಗರ, ಬೆಂಗಳೂರು-10

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು:**

1. ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ. 32,575-00 (ಮೂವತ್ತೆರಡು ಸಾವಿರದ ಐದು ನೂರ ಎಪ್ಪತ್ತೈದು) ಗಳನ್ನು ದಿನಾಂಕ: 31.08.2004 ರಿಂದ ಸಾಲ ಪೂರ್ತಿಪಾವತಿಯಾಗುವವರೆಗೆ ಶೇಕಡ 17+2 ರಂತೆ ಬಡ್ಡಿ ಮತ್ತು ಸುಸ್ತಿ ಬಡ್ಡಿ ಹಾಗೂ ಇತರೆ ಖರ್ಚಿನೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ ಅನಿ (ಕೈ ಮತ್ತು ಇ) ಡಿಐಎಸ್:ಡಿ7:4263:2004-05 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.
2. ಒಂದನೇ ಪ್ರತಿವಾದಿಯವರು ಪಡೆದಿರುವ ಈ ಸಾಲಕ್ಕೆ 2, 3 ಮತ್ತು 4ನೇ ಪ್ರತಿವಾದಿಯವರು ಜಾಮೀನುದಾರರಾಗಿರುತ್ತಾರೆ.
3. ವಾದಿಯು ಈ ದಾವಾ ಅರ್ಜಿಯ ಜೊತೆ 1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 4ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 4ನೇ ಪ್ರತಿವಾದಿ ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಏಕ ಮಾತ್ರ ಸ್ವತ್ತನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ ಮಾಡಲು/ ಪರಬಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೆ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್: ಡಿಕ್ರಿ ನೀಡಿದರೂ ಸದರಿ ಅವಾರ್ಡ್: ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.
4. ವಾದಿಯು ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೆ 4ನೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ ಹಾಗೂ ಪರಬಾರೆ ಮಾಡದಂತೆ: ತಡೆಯದೆ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.
5. ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈ ಮತ್ತು ಇ) ಆದ ನಾನು 4ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

4ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ, ರೂ. 32,575-00 (ಮೂವತ್ತೆರಡು ಸಾವಿರದ ಐದು ನೂರ ಎಪ್ಪತ್ತೈದು) ಗಳನ್ನು ದಿನಾಂಕ: 31.08.2004 ರಿಂದ ಸಾಲ ಪೂರ್ತಿ ಪಾವತಿಯಾಗುವವರೆಗೆ ಶೇಕಡಾ 17+2 ರಂತೆ ಬಡ್ಡಿ ಮತ್ತು ಸುಸ್ತಿ ಬಡ್ಡಿ ಹಾಗೂ ಇತರೆ ಖರ್ಚಿನೊಂದಿಗೆ ವಾದಿಯ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ: 17.01.2005ರ ಒಳಗಾಗಿ ಅಧಿಕೃತ ಚಲನ್/ ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ತೀರ್ಪು ಪೂರ್ವ ಜಪ್ತಿ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಪ್ರಕರಣದ 4ನೇ ಪ್ರತಿವಾದಿಯಾದ ಶ್ರೀ ಹೆಚ್. ಬಿ. ಹಾದಿಮನಿ ಬಿನ್ ಬಸಪ್ಪ ಹಾದಿಮನಿ ಇವರ ಹೆಸರಿನಲ್ಲಿರುವ ಬೆಂಗಳೂರು ಉತ್ತರ ತಾಲ್ಲೂಕು, ಯಲಹಂಕ ಹೋಬಳಿ, ಜಾರಕಬಂಡೆ ಕಾವಲು ಗ್ರಾಮದ ಸರ್ವೆನಂ. 1, ಪ್ಲಾಟ್ ನಂ. 44, ನಿವೇಶನ 1 ಮತ್ತು 2ನೇ ನಂಬರ್ ನಿವೇಶನವಾಗಿದ್ದು, ಹಾಲಿ ಬೆಂಗಳೂರು ಮಹಾನಗರ ಪಾಲಿಕೆ ಮಹಾಲಕ್ಷ್ಮೀಪುರ ವಲಯ, 12ನೇ ವಿಭಾಗಕ್ಕೆ ಸೇರಿರುವ, ಸರಸ್ವತಿಪುರ, 6ನೇ ಅಡ್ಡ

ರಸ್ತೆಯಲ್ಲಿರುವ, ಮುನಿಸಿಪಲ್ 1-2/34ನೇ (ಒಂದು ಡ್ಯಾಷ್ ಎರಡು ಸಬ್ ಮೂವತ್ತ ನಾಲ್ಕು)ನೇ ನಂಬರು ಉತ್ತರಾರ್ಧ ಭಾಗದ ಮನೆ ಸಹಿತವಾದ ಸ್ವತ್ತಿಗೆ ಈ ಕೆಳಕಂಡ ಚಕ್ಕುಬಂದಿ:

ಪೂರ್ವಕ್ಕೆ : 24 ಮತ್ತು 23ನೇ ನಂಬರು ಸ್ವತ್ತುಗಳು

ಪಶ್ಚಿಮಕ್ಕೆ : ರಸ್ತೆ

ಉತ್ತರಕ್ಕೆ : 3ನೇ ನಂಬರು ಸ್ವತ್ತು

ದಕ್ಷಿಣಕ್ಕೆ : ಇದೇ ಮುನಿಸಿಪಲ್ 1-2/34ನೇ ನಂಬರು ಪೈಕಿ ದಕ್ಷಿಣಾರ್ಧ ಭಾಗದ 30-0 x 40-0 ಅಡಿಗಳ ಅಳತೆಯುಳ್ಳ ನಿವೇಶನ ಹಾಗೂ ಇದರಲ್ಲಿರುವ ಎರಡೂವರೆ ಚದರ ವಿಸ್ತೀರ್ಣದ ಮನೆ ಸಹಿತವಾದ ಸ್ವತ್ತು. ಈ ಮಧ್ಯೆ ಇರುವ ಪೂರ್ವ-ಪಶ್ಚಿಮ 40-0 (ನಲವತ್ತು) ಅಡಿಗಳು, ಉತ್ತರ-ದಕ್ಷಿಣ: 30-0 (ಮೂವತ್ತು) ಅಡಿಗಳು, ಒಟ್ಟು 1200 ಚದರ ಅಡಿಗಳು. ಈ ರೀತಿ ಅಳತೆ ಮತ್ತು ಚಕ್ಕುಬಂದಿಗೊಳಪಟ್ಟ ಮನೆ ಸಹಿತವಾದ ನಿವೇಶನ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 6.12.2004 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಅಪರ ನಿಬಂಧಕರು,
(ಕೈಗಾರಿಕೆ ಮತ್ತು ಇತರೆ).

ಪಿ.ಆರ್.9

## ಸಹಕಾರ ಇಲಾಖೆ
## ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ
## ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18
## ದಾವಾ ಅರ್ಜಿ ಸಂಖ್ಯೆ: ಜೆಆರ್‌ಬಿ:ಡಿಸ್:156: 2003-04 ದಿನಾಂಕ: 26ನೇ ನವೆಂಬರ್ 2004

**ವಾದಿ :** **ವಿರುದ್ಧ** **ಪ್ರತಿವಾದಿಗಳು :**

ವ್ಯವಸ್ಥಾಪಕ ನಿರ್ದೇಶಕರು,
ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್
ನಿಯಮಿತ, ಕೋಲಾರ.

ಶ್ರೀಮತಿ ಗಿರಿಜಾಂಬ, ಕೋಂ ಲೇಟ್ ಎಸ್. ಆರ್. ನಟರಾಜ್,
ಹಿರಿಯ ಸಹಾಯಕರು, ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್
ನಿಯಮಿತ, ಶಿಡ್ಲಘಟ್ಟ ಶಾಖೆ, ಕೋಲಾರ ಜಿಲ್ಲೆ.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಚರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.5,99,233-00 ಗಳನ್ನು ದಿನಾಂಕ: 31.12.2003 ರಿಂದ ಶೇಕಡಾ 18 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ: ಜೆಆರ್‌ಬಿ: ಎಂಡಿ: 156: 2003-04 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

2. ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಯು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ ಪರಬಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಯ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್: ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್: ಡಿಕ್ರಿಯನ್ವಯ ಪ್ರತಿವಾದಿಯಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಯಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದೂ ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

3. ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ, ವಾದಿಯು ಕಲಂ 103ರ ಅರ್ಜಿಯಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ: ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ. ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

4. ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ. 5,99,233-00 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ: 24.12.2004 ರ ಒಳಗಾಗಿ ಅಧಿಕೃತ ಚಲನ್/ ರಶೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಕೋಲಾರ ಟೌನ್ ಪಾಲಸಂದ್ರ ಬಡಾವಣೆಯಲ್ಲಿರುವ ಮುನಿಸಿಪಲ್ ಖಾತೆ ನಂ. 2064 ಹಾಗೂ ಅಸೆಸ್‌ಮೆಂಟ್ ನಂ. 2271 ಆಗಿರುವ ಒಟ್ಟು 1200 ಚದರ ಅಡಿ ಅಳತೆಯ ನಿವೇಶನ ಸಂಖ್ಯೆ: 26 ಮತ್ತು ಇದರಲ್ಲಿ ಕಟ್ಟಿರುವ ವಾಸದ ಮನೆ, ವ್ಯಾಪಾರ ಮಳಿಗೆ ಇತ್ಯಾದಿ ಸೇರಿದಂತೆ, ಚಕ್ಕುಬಂದಿ:

ಪೂರ್ವಕ್ಕೆ : ಮುಖ್ಯರಸ್ತೆ
ಪಶ್ಚಿಮಕ್ಕೆ : ಶ್ರೀಮತಿ ಅಮೃತಮ್ಮ ಇವರಿಗೆ ಸೇರಿದ ನಿವೇಶನ
ಉತ್ತರಕ್ಕೆ : ನಿವೇಶನ ಸಂಖ್ಯೆ: 27
ದಕ್ಷಿಣಕ್ಕೆ : ಖಾಸಗಿಯವರಿಗೆ ಸೇರಿದ ಖಾಲಿ ನಿವೇಶನ

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 26.11.2004 ರಂದು ನೀಡಿರುತ್ತೇನೆ.

ಪಿ.ಆರ್.10

**ಬಸವೇಗೌಡ**

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ**

**ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18**

**ದಾವಾ ಅರ್ಜಿ ಸಂಖ್ಯೆ: ಜೆಆರ್‌ಬಿ:ಡಿಸ್:1095: 2003-04 ದಿನಾಂಕ: 29ನೇ ನವೆಂಬರ್ 2004**

**ವಾದಿ :**
ವ್ಯವಸ್ಥಾಪಕ ನಿರ್ದೇಶಕರು,
ದಾವಣಗೆರೆ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್
ನಿಯಮಿತ, ದಾವಣಗೆರೆ.

**ವಿರುದ್ಧ ಪ್ರತಿವಾದಿಗಳು :**
ಕಾರ್ಯದರ್ಶಿ,
ಅಲ್‌ಫತಾ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿಮಿಟೆಡ್.,
ಕೆ.ಆರ್. ರೋಡ್, ದಾವಣಗೆರೆ ಜಿಲ್ಲೆ.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಚರಾಸ್ಥಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.3,29,31,407/- ಗಳನ್ನು ಬಡ್ಡಿ ಮತ್ತು ಸುಸ್ತಿ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ: ಜೆಆರ್‌ಬಿ:ಡಿಸ್:1095:2003-04 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ. ಹಾಗೂ ಈ ದಾವಾ ಅರ್ಜಿಯನ್ನು ಇತ್ಯರ್ಥಕ್ಕಾಗಿ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಇವರಿಗೆ ಈಗಾಗಲೇ ವಹಿಸಲಾಗಿದೆ.

2. ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಯು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ ಪರಬಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಯ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್: ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್: ಡಿಕ್ರಿಯನ್ವಯ ಪ್ರತಿವಾದಿಯಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಯಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದೂ ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

3. ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ, ವಾದಿಯು ಕಲಂ 103ರ ಅರ್ಜಿಯಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ: ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ. ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

4. ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ. 3,29,31,407/- ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ: 31.12.2004 ರ ಒಳಗಾಗಿ ಅಧಿಕೃತ ಚಲನ್/ ರಶೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ದಾವಣಗೆರೆ ನಗರದ 3ನೇ ವಾರ್ಡ್ 4ನೇ ಡಿವಿಷನ್, ಇಮಾಮ್ ನಗರದಲ್ಲಿರುವ ಪ್ರತಿವಾದಿಗಳಿಗೆ ಸೇರಿದ ಈ ಕೆಳಕಂಡ ಸ್ಥಿರಾಸ್ಥಿಗಳು.

1. ಮುನಿಸಿಪಲ್ ಡೋರ್ ನಂ. 608 (ಹಳೇ ನಂ. 1080) ಆಗಿರುವ 50 ಅಡಿ x 15 ಅಡಿ ಮತ್ತು $\frac{13 \times 12 \times 15}{2}$ ಅಳತೆಯ ಖಾಲಿ ನಿವೇಶನ ಸಂಖ್ಯೆ: 7
2. ಮುನಿಸಿಪಲ್ ಡೋರ್ ನಂ. 607/3 (ಹಳೇ ನಂ. 531) ಆಗಿರುವ 30 ಅಡಿ x 15 ಅಡಿ ಅಳತೆಯ ನಿವೇಶನ ಮತ್ತು ಇದರಲ್ಲಿ ಕಟ್ಟಿರುವ ವಾಸದ ಮನೆ ಮತ್ತು ಇದರಲ್ಲಿ ಕಟ್ಟಿರುವ ಆರ್.ಸಿ.ಸಿ. ಕಟ್ಟಡ ಸೇರಿದಂತೆ.
3. ಮುನಿಸಿಪಲ್ ಡೋರ್ ನಂ. 607/2. ಆಗಿರುವ 30 ಅಡಿ x 15 ಅಡಿ ಅಳತೆಯ ನಿವೇಶನ ಮತ್ತು ಇದರಲ್ಲಿ ಕಟ್ಟಿರುವ ಆರ್.ಸಿ.ಸಿ. ಕಟ್ಟಡ ಸೇರಿದಂತೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 29.11.2004 ರಂದು ನೀಡಿರುತ್ತೇನೆ.

ಪಿ.ಆರ್.11

**ಬಸವೇಗೌಡ**

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಅಧಿಕೃತ ಅಧಿಕಾರಿ ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರ ನ್ಯಾಯಾಲಯ**

**ಪ್ರಕಟಣೆ ಸಂಖ್ಯೆ: ಎ5:ಎಸ್‌ಡಿಎಲ್: ಎಸ್‌ಜಡ್: ಸಿಆರ್-67/ 2003-04 ದಿನಾಂಕ: 20ನೇ ಡಿಸೆಂಬರ್ 2004**

**ವಿಷಯ :** ಪರವಾನಿಗೆ ಇಲ್ಲದೆ ಶ್ರೀಗಂಧ ಸಾಗಾಣಿಕೆಯಲ್ಲಿ ಸಿಕ್ಕಿಬಿದ್ದ ಮೋಟಾರ್ ಸೈಕಲ್ ಸಂಖ್ಯೆ ಕೆಎ-04-ವೈ-4866 ಮತ್ತು ಕೆಎ-03-ಇ-7959 ರ ಬಗ್ಗೆ.

**ಉಲ್ಲೇಖ :** ಹೊಸಕೋಟೆ ಪೋಲಿಸ್ ಠಾಣೆಯಲ್ಲಿ ದಾಖಲಾಗಿರುವ ಕ್ರೈ. ಸಂ. 183/03.

ಆರಕ್ಷಕ ಉಪ ನಿರೀಕ್ಷಕರು, ಅಪರಾಧ ವಿಭಾಗ, ಹೊಸಕೋಟೆ ಪೋಲಿಸ್ ಠಾಣೆ ಹೊಸಕೋಟೆ ರವರು ಉಲ್ಲೇಖದ ಅವರ ಠಾಣೆಯ ಕ್ರೈಂ ಸಂಖ್ಯೆ 183/03 ರಲ್ಲಿ ಪರವಾನಿಗೆ ಇಲ್ಲದೆ ಶ್ರೀಗಂಧವನ್ನು ಸಾಗಾಣಿಕೆ ಮಾಡುತ್ತಿದ್ದ ಮೋಟಾರ್ ಸೈಕಲ್ ಸಂಖ್ಯೆ ಕೆಎ-04-ವೈ-4866 ಹಾಗೂ ಕೆಎ-03-ಇ-7959ನ್ನು ವಶಪಡಿಸಿಕೊಂಡು ಮುಂದಿನ ಕ್ರಮ ಜರುಗಿಸಲು ಮೇಲ್ಕಂಡ ಮೋಟಾರ್ ಸೈಕಲ್ ಮತ್ತು ವಶಪಡಿಸಿಕೊಂಡ ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಹೊಸಕೋಟೆ ರವರಿಗೆ ದಿನಾಂಕ: 03.09.2003 ರಂದು ವಹಿಸಿಕೊಟ್ಟಿರುತ್ತಾರೆ. ವಲಯ ಅರಣ್ಯಾಧಿಕಾರಿಯವರು ವಾಹನಗಳನ್ನು ಮತ್ತು ಶ್ರೀಗಂಧವನ್ನು ಇಲಾಖಾ ವಶಕ್ಕೆ ತೆಗೆದುಕೊಂಡು 1963ರ ಅರಣ್ಯ ಕಾಯ್ದೆಯಡಿ ಮುಂದಿನ ಕ್ರಮಕ್ಕಾಗಿ ಅಧಿಕೃತ ಅಧಿಕಾರಿ ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗರವರಿಗೆ ವರದಿ ಮಾಡಿರುತ್ತಾರೆ. ಮೇಲ್ಕಂಡ ಎರಡೂ ವಾಹನಗಳು ಅಕ್ರಮ ಶ್ರೀಗಂಧ ಸಾಗಾಣಿಕೆಯಲ್ಲಿ ತೊಡಗಿರುವುದು, ಹೊಸಕೋಟೆ ಪೋಲಿಸರ ವರದಿಯಿಂದ ಮೇಲ್ನೋಟಕ್ಕೆ ಕಂಡು ಬಂದಿದ್ದು, ಈ ವಾಹನಗಳನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆಯ 71ಎ ಮೇರೆಗೆ ಕ್ರಮ ಜರುಗಿಸುವುದು ಸೂಕ್ತವೆಂದು ಭಾವಿಸಿ, ವಾಹನ ಮಾಲೀಕತ್ವದ ಬಗ್ಗೆ ವಿವರಗಳನ್ನು ನೀಡಲು ಪ್ರಾದೇಶಿಕ ಸಾರಿಗೆ ಅಧಿಕಾರಿ ಪೂರ್ವ ಬೆಂಗಳೂರು ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ ಉತ್ತರರವರಿಗೆ ಪತ್ರ ಬರೆಯಲಾಗಿ, ಸಂಬಂಧಪಟ್ಟ ಪ್ರಾದೇಶಿಕ ಅಧಿಕಾರಿಗಳು ವಾಹನ ಮಾಲೀಕತ್ವದ ವಿವರಗಳನ್ನು ನೀಡಿರುತ್ತಾರೆ.

| | | | |
|---|---|---|---|
| ಕೆಎ-04-ವೈ-4866 | ಮಾಲೀಕರು | : | ಶ್ರೀ ಸುಂದರ್ ಎಸ್. ಆರ್. ಬಿನ್ ರಾಮಣ್ಣ<br>ನಂ. 56ದ 2ನೇ ಕ್ರಾಸ್, ಎಂ.ವಿ. ಬ್ಲಾಕ್, ಪಿ.ಜಿ.ಹಳ್ಳಿ ಬೆಂಗಳೂರು-560 003. |
| ಕೆಎ-03-ಇ-7959 | ಮಾಲೀಕರು | : | ಶ್ರೀ ಬಾಲಕೃಷ್ಣ ಬಿನ್ ಡಿ. ಕಂದಸ್ವಾಮಿ,<br>ಜಿಬಿಜೆ-306-10ನೇ ಕ್ರಾಸ್ ಸ್ಟ್ರೀಟ್ ಹೆಚ್‌ಎಎಲ್ ಟೌನ್‌ಷಿಪ್ ಮಾರತ್‌ಹಳ್ಳಿ ಬೆಂಗಳೂರು-560 037 |

ದಿನಾಂಕ: 06.01.2004 ರಲ್ಲಿ ಮೇಲ್ಕಂಡ ವಿಳಾಸದಾರರಿಗೆ ನೊಂದಾಯಿತ ಅಂಚೆ ಮೂಲಕ ನೋಟೀಸ್ ಜಾರಿ ಮಾಡಿ 15 ದಿವಸಗಳ ಒಳಗೆ ಕೆಳಸಹಿದಾರರ ಸಮಕ್ಷಮ ಖುದ್ದಾಗಿ ಆಗಲಿ ಅಥವಾ ಅವರಿಂದ ಅಧಿಕಾರ ಪಡೆದ ಯಾರಾಗಲಿ ಹಾಜರಾಗಿ ಅಹವಾಲನ್ನು ಸಲ್ಲಿಸಲು ಸೂಚಿಸಲಾಗಿತ್ತು. ಆದರೆ ಈ ಎರಡೂ ನೋಟೀಸ್‌ಗಳು ಕೆಳಕಂಡ ಅಂಚೆ ಷರಾಗಳೊಂದಿಗೆ ಹಿಂದಿರುಗಿ ಬಂದಿವೆ.

1. ಶ್ರೀ ಎಸ್. ಆರ್. ಸುಂದರ್ — ಮೃತರಾಗಿದ್ದಾರೆ,
2. ಶ್ರೀ ಬಾಲಕೃಷ್ಣ — ವಿಳಾಸದಾರರು ಬಿಟ್ಟಿರುತ್ತಾರೆ.

ಆದ್ದರಿಂದ ಕಳುಹಿಸಿದವರಿಗೆ ಹಿಂದಿರುಗಿಸಿದೆ.

ಮೇಲ್ಕಂಡ ಷರಾಗಳೊಂದಿಗೆ ಹಿಂದಿರುಗಿ ಬಂದ ನಂತರವೂ ದಿನಾಂಕ: 03.07.2004 ರಲ್ಲಿ ಅಂತಿಮವಾಗಿ ಮತ್ತೊಂದು ನೋಟೀಸನ್ನು ಹೊಸಕೋಟೆ ಪೋಲಿಸರ ಮೂಲಕ ಜಾರಿಗೊಳಿಸಲು ಉದ್ದೇಶಿಸಿ ನೋಟೀಸ್‌ಗಳನ್ನು ಕಳುಹಿಸಿ ನೋಟೀಸ್‌ನ ದಿನಾಂಕದಿಂದ 15 ದಿವಸಗಳ ಒಳಗೆ ಖುದ್ದಾಗಿ ಆಗಲಿ, ಅಥವಾ ಅವರಿಂದ ಅಧಿಕಾರ ಪಡೆದ ಯಾರಾಗಲಿ ಹಾಜರಾಗಿ ಅಹವಾಲು ಸಲ್ಲಿಸಲು ಸೂಚಿಸಲಾಗಿತ್ತು. ಹೊಸಕೋಟೆ ಪೋಲಿಸರು ವಾಹನ ಸಂಖ್ಯೆ: ಕೆಎ-04-ವೈ-4866ರ ಮಾಲೀಕರಾದ ಶ್ರೀ ಎಸ್. ಆರ್. ಸುಂದರ್ ರವರು ಮೃತರಾಗಿದ್ದು ಅವರ ಪತ್ನಿಯವರಿಗೆ ನೋಟೀಸ್ ಜಾರಿ ಮಾಡಲಾಗಿದೆ ಎಂದು, ಆದರೆ ವಾಹನ ಸಂಖ್ಯೆ ಕೆಎ-03-ಇ-7959 ರ ಮಾಲೀಕರ ವಿಳಾಸಕ್ಕೆ ಬೇಟಿ ನೀಡಿ ವಿಚಾರಿಸಲಾಗಿ ಈ ವಿಳಾಸದಲ್ಲಿ ವಾಹನದ ಮಾಲೀಕರು ವಾಸವಾಗಿರುವ ಬಗ್ಗೆ ಯಾವುದೇ ಮಾಹಿತಿ ಇಲ್ಲವೆಂದು ವರದಿ ಮಾಡಿರುತ್ತಾರೆ. ಆದರೆ ಇದುವರೆವಿಗೂ ಎರಡೂ ವಾಹನದ ಮಾಲೀಕರು ಹಾಜರಾಗಿರುವುದಿಲ್ಲ. ಹಾಗೂ ಯಾವುದೇ ಅಹವಾಲನ್ನು ಸಲ್ಲಿಸಿಲ್ಲ. ಈ ಅಂಶವನ್ನು ಪರಿಗಣಿಸಿದಾಗ ವಾಹನದ ಮಾಲೀಕರು ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ಭಾಗಿಯಾಗಿದ್ದು ಉದ್ದೇಶ ಪೂರ್ವಕವಾಗಿ ಹಾಜರಾಗದೇ ಇರುವುದು ಕಂಡು ಬರುತ್ತದೆಯಾದ್ದರಿಂದ ಈ ಅಂತಿಮ ನೋಟೀಸ್ ಪ್ರಕಟಣೆ.

ಪರವಾನಿಗೆ ಇಲ್ಲದ ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ಮೋಟಾರ್ ಸೈಕಲ್ ಸಂಖ್ಯೆ ಕೆಎ-04-ವೈ-4866 ಹಾಗೂ ಕೆಎ-03-ಇ-7959 ನ್ನು ವಶಪಡಿಸಿಕೊಂಡಿದ್ದು ಇದರ ಮಾಲೀಕತ್ವದ ಬಗ್ಗೆ ದಾಖಲಾತಿಗಳೊಂದಿಗೆ ಇದುವರೆವಿಗೂ ಯಾರೂ ಹಾಜರಾಗಿರುವುದಿಲ್ಲ. ಆದ್ದರಿಂದ ಸಂಬಂಧಪಟ್ಟ ವಾಹನ ಮಾಲೀಕರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಪತ್ರದ ಪ್ರಕಟಣೆಯ ದಿನಾಂಕದಿಂದ 30 ದಿವಸಗಳ ಒಳಗಾಗಿ ಹಾಜರಾಗಿ ವಾಹನದ ಮಾಲೀಕತ್ವ ಮತ್ತು ಶ್ರೀಗಂಧ ಸಾಗಾಣಿಕೆ ಪ್ರಕರಣದಲ್ಲಿ ಭಾಗಿಯಲ್ಲವೆಂದು ರುಜುವಾತುಪಡಿಸಲು ಸಾಕ್ಷಾಧಾರಗಳು ಮತ್ತು ಅಹವಾಲುಗಳನ್ನು ಸಲ್ಲಿಸುವುದು, ಇಲ್ಲವಾದಲ್ಲಿ ಪರವಾನಿಗೆ ಇಲ್ಲದೆ ಶ್ರೀಗಂಧ ಸಾಗಾಣಿಕೆ ಮಾಡಿದ್ದಕ್ಕೆ ಸಂಬಂಧಿಸಿದಂತೆ 1963 ರ ಸೆಕ್ಷನ್ 71ಎ ರ ಮೇರೆಗೆ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಎನ್. ಎಲ್. ಶಾಂತಕುಮಾರ್**

ಪಿ.ಆರ್.12

ಅಧಿಕೃತ ಅಧಿಕಾರಿ ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**"ಅಧಿಕೃತ ಜ್ಞಾಪನ" ನಂ: ಎಲ್‌ಎನ್‌ಡಿ (ಎನ್) ಸಿಆರ್-13/ 2003-04 ದಿನಾಂಕ: 14ನೇ ಡಿಸೆಂಬರ್ 2004**

**ವಿಷಯ :** ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ ಕನ್ನಲ್ಲಿ ಗ್ರಾಮದ ಸರ್ವೆ ನಂ. 94ರ ಸರ್ಕಾರಿ ಮುಫತ್ತ ಕಾವಲಿನಲ್ಲಿ 8-00 ಎಕರೆ ಜಮೀನನ್ನು ವೀರಶೈವ ರುದ್ರ ಭೂಮಿಗೆ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಪತ್ರದ ಸಂಖ್ಯೆ: ಆರ್‌ಡಿ 62 ಎಲ್‌ಜಿಬಿ 04 ದಿನಾಂಕ: 11.10.2004
2. ತಹಸೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಪತ್ರದ ಸಂಖ್ಯೆ: ಎಲ್‌ಎನ್‌ಡಿ ಸಿಆರ್ 60/03-04 ದಿನಾಂಕ: 24.12.2003.
3. ಕಾರ್ಯದರ್ಶಿ ಸಿದ್ದವನ ಟ್ರಸ್ಟ್ (ರಿ)ರವರ ಮನವಿ ದಿನಾಂಕ: 5.11.2004.

ವಿಷಯಕ್ಕೆ ಸಂಬಂಧಿಸಿದಂತೆ, ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ ಕನ್ನಲ್ಲಿ ಗ್ರಾಮದ ಸರ್ವೆ ನಂ. 94ರಲ್ಲಿ (ಸರ್ಕಾರಿ ಮುಫತ್ತ್ ಕಾವಲ್) 8-00 ಎಕರೆ ಜಮೀನನ್ನು ವೀರಶೈವ ರುದ್ರಭೂಮಿಗೆ ಕಾಯ್ದಿರಿಸಲು ಕೋರಿ ಸಿದ್ದವನ ಟ್ರಸ್ಟ್ (ರಿ) ಬೆಂಗಳೂರು ರವರು ಮನವಿಯನ್ನು ಸಲ್ಲಿಸಿರುತ್ತಾರೆ. ಸದರಿ ಸಂಸ್ಥೆಯ ಮನವಿಯ ಬಗ್ಗೆ ತಹಸೀಲ್ದಾರ್‌ರವರು ಕಡತ ತಯಾರಿಸಿ, ಶಿಫಾರಸ್ಸಿನೊಂದಿಗೆ ವರದಿ ಸಲ್ಲಿಸಿರುತ್ತಾರೆ.

ಸದರಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿ, ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ ಕನ್ನಲ್ಲಿ ಗ್ರಾಮದ ಸರ್ವೆ ನಂ. 97 ಸರ್ಕಾರಿ ಮುಫತ್ತ ಕಾವಲ್‌ನಲ್ಲಿ 8-00 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ಕಲಂ 97(4) ರಡಿ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 71ರಡಿ ವೀರಶೈವ ರುದ್ರಭೂಮಿಗೆ ಕಾಯ್ದಿರಿಸಲು ಹಾಗೂ ನಿಶಲ್ಕುವಾಗಿ ಸದರಿ ರುದ್ರಭೂಮಿಯ ಉಸ್ತುವಾರಿಯನ್ನು ಸಂಬಂಧಿಸಿದ ಗ್ರಾಮ ಪಂಚಾಯಿತಿಗೆ ವಹಿಸಲು ಸರ್ಕಾರವು ಪೂರ್ವಾನುಮೋದನೆ ನೀಡಲಾಗಿದೆ.

ಆದ್ದರಿಂದ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ, ಕನ್ನಲ್ಲಿ ಗ್ರಾಮದ ಸರ್ವೆ ನಂ: 97ರ ಸರ್ಕಾರಿ ಮುಫತ್ತ್ ಕಾವಲ್‌ನಲ್ಲಿ 8-00 ಎಕರೆ ಜಮೀನನ್ನು ವೀರಶೈವ ರುದ್ರಭೂಮಿಗೆ ಸ್ಕೆಚ್‌ನಲ್ಲಿ ತೋರಿಸಿರುವಂತೆ ಕಾಯ್ದಿರಿಸಲಾಗಿದೆ. ಹಾಗೂ ಸದರಿ ರುದ್ರಭೂಮಿಯ ಸಂಪೂರ್ಣ ಉಸ್ತುವಾರಿ ಹಾಗೂ ಹತೋಟಿ ಸಂಬಂಧಪಟ್ಟ ಗ್ರಾಮ ಪಂಚಾಯ್ತಿಯಲ್ಲಿದ್ದಾಗ್ಯೂ, ಅದರ ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವ ಸಲುವಾಗಿ ಗ್ರಾಮ ಪಂಚಾಯಿತಿಯವರು ಸಿದ್ದವನ ಟ್ರಸ್ಟ್ ಸಂಸ್ಥೆಯವರಿಗೆ ಸೂಕ್ತ ಅವಕಾಶ ಹಾಗೂ ಅಗತ್ಯ ಅನುಮತಿಯನ್ನು ನೀಡುವುದೆಂದು ಹಾಗೂ ಈ ರೀತಿಯ ಅನುಮತಿಯಿಂದ ಸದರಿ ಟ್ರಸ್ಟ್‌ನವರಿಗೆ ಸದರಿ ರುದ್ರಭೂಮಿಯ ಮೇಲೆ ಯಾವುದೇ ವಿಧವಾದ ಹಕ್ಕು ಇರತಕ್ಕದಲ್ಲವೆಂಬ ಷರತ್ತಿಗೊಳಪಟ್ಟು ಪ್ರಸ್ತಾಪಿತ ಜಮೀನು ಕನ್ನಲ್ಲಿ ಗ್ರಾಮದ ಸರ್ವೆ ನಂ: 97ರಲ್ಲಿ 8-00 ಎಕರೆ ವಿಸ್ತೀರ್ಣವನ್ನು ವೀರಶೈವ ಜನಾಂಗದ ರುದ್ರಭೂಮಿಗಾಗಿ ಕಾಯ್ದಿರಿಸಲಾಗಿದೆ.

ಪಿ.ಆರ್.17 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಸಾಗರ ವಿಭಾಗ, ಸಾಗರ**

**ಪ್ರಕಟಣೆ ಕ್ರ: ಬಿ4:ರಹದಾರಿ:ಸಿಆರ್:6:2004-05 ದಿನಾಂಕ: 21ನೇ ಡಿಸೆಂಬರ್ 2004**

**ವಿಷಯ :** ಸಾಗರ ವಿಭಾಗ ಸಾಗರ ಅರಣ್ಯ ವಲಯದಲ್ಲಿ ನಮೂನೆ - 28ರ ರಹದಾರಿ ಕ್ರ: 167357 ಕಾಣೆಯಾಗಿರುವ ಬಗ್ಗೆ.

**ಉಲ್ಲೇಖ :** ವಲಯ ಅರಣ್ಯಾಧಿಕಾರಿ, ಸಾಗರ ವಲಯ, ಸಾಗರ ಇವರ ಪತ್ರದ ಕ್ರ:ಸ 1574/ 2004-05 ದಿನಾಂಕ: 20.12.2004.

ಈ ಮೂಲಕ ತಿಳಿಯಪಡಿಸುವುದೇನೆಂದರೆ, ವಲಯ ಅರಣ್ಯಾಧಿಕಾರಿ, ಸಾಗರ ವಲಯ, ಸಾಗರ ಇವರು ಉಲ್ಲೇಖಿತ ಪತ್ರದಲ್ಲಿ ವರದಿ ಮಾಡಿರುವಂತೆ ಕಸಬಾ ಶಾಖೆ ಪ್ರಭಾರ ವನಪಾಲಕರಾದ ಶ್ರೀ ಬಿ. ಸುರೇಶ್, ಇವರಿಗೆ ಶ್ರೀ ಗಣಪತಿ ಭಟ್, ನಿರ್ಕೋಡು ಗ್ರಾಮದ ಸರ್ವೆ ನಂಬರ್ 3/1 ಇವರ ಜಮೀನಿನಲ್ಲಿರುವ ಆಕೇಶಿಯಾ ಸೌದೆ ಸಾಗಾಣಿಕೆ ಸಲುವಾಗಿ ವಿತರಿಸಲಾದ ನಮೂನೆ 28ರ ರಹದಾರಿ ಕ್ರಮಾಂಕ: 167333 ರಿಂದ 167537ರ ಒಟ್ಟು 25 (ಇಪ್ಪತ್ತೈದು) ರಹದಾರಿಗಳಲ್ಲಿ ಕ್ರ: 167357ರ ಒಂದು ರಹದಾರಿ (ದ್ವಿಪ್ರತಿಯಲ್ಲಿ) ದಿನಾಂಕ: 18.12.2004 ರಂದು ಕಾಣೆಯಾಗಿರುವುದಾಗಿ ವರದಿ ಮಾಡಿರುತ್ತಾರೆ.

| ಕ್ರ.ಸಂ. | ಪುಸ್ತಕ ಸಂಖ್ಯೆ | ಕಾಣೆಯಾಗಿರುವ ಫಾರಂ ನಂಬರ್ 28ರ ರಹದಾರಿ ಕ್ರಮಾಂಕ | ವಿವರ |
|---|---|---|---|
| 1) | 3448 | 167357 | ಶ್ರೀ ಗಣಪತಿ ಭಟ್, ನಿರ್ಕೋಡು ಗ್ರಾಮ ಇವರಿಗೆ ಆಕೇಶಿಯಾ ಸೌದೆ ಸಾಗಾಣಿಕೆ ಸಲುವಾಗಿ ವಿತರಿಸಲಾಗಿದ್ದು, ದಿನಾಂಕ: 18.12.2004 ರಂದು ವಲಯ ಅರಣ್ಯಾಧಿಕಾರಿ, ಸಾಗರ ಇವರ ವರದಿಯಂತೆ ಕಾಣೆಯಾಗಿರುತ್ತದೆ. |

ಆದ್ದರಿಂದ ಈ ಮೇಲ್ಕಂಡ ಫಾರಂ ನಂಬರ್ 28ರ ರಹದಾರಿ ಕ್ರ: 167357 ಕಾಣೆಯಾದುದರಿಂದ ಈ ಪ್ರಕಟಣೆ ಹೊರಡಿಸಲಾಗಿರುತ್ತದೆ. ಈ ರಹದಾರಿ ಸಿಕ್ಕಿದಲ್ಲಿ ಅಥವಾ ಇದರಲ್ಲಿ ಯಾವುದೇ ಅರಣ್ಯ ಉತ್ಪನ್ನ ಸಾಗಾಣಿಕೆ ಆಗುತ್ತಿದ್ದಲ್ಲಿ ಕೂಡಲೇ ಅಮಾನತ್ತುಪಡಿಸಿ ಈ ಕೆಳಸಹಿದಾರ ಸಮಕ್ಷಮ ಹಾಜರುಪಡಿಸಲು ತಿಳಿಸಿದೆ. ಈ ಸಂಬಂಧ ನಿಮ್ಮ ವಲಯದ ಎಲ್ಲಾ ರಕ್ಷಣಾ ಸಿಬ್ಬಂದಿಗೆ ಅರಣ್ಯ ತನಿಖಾ ಠಾಣೆಗಳ ಸಿಬ್ಬಂದಿಗಳಿಗೆ ಸೂಕ್ತ ನಿರ್ದೇಶನ ನೀಡಿ ಈ ಬಗ್ಗೆ ಜಾಗರೂಕತೆಯಿಂದ ಕರ್ತವ್ಯ ನಿರ್ವಹಿಸುವಂತೆ ಸೂಚನೆ ನೀಡಲು ತಿಳಿಸಿದೆ.

ಪಿ.ಆರ್.34 ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಸಹಕಾರ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 268 ಸಿಎಸ್‌ಎಸ್ 2000 ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 268 ಸಿಎಸ್‌ಎಸ್ 2000 ದಿನಾಂಕ: 21.07.2000 26.07.2000 ಮತ್ತು 31.03.2003ರಲ್ಲಿ ಹಾಸನ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ಹಾಸನ ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮ ನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.60 **ಆರ್. ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.